ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಬುಧವಾರ, ದಿನಾಂಕ : 23 ನೇ ಸೆಪ್ಟೆಂಬರ್, 2020

ಗಂಗಾ ಕಲ್ಯಾಣ ಹಾಗೂ ಇತರೆ ಯೋಜನೆಗಳ ಅನುಷ್ಠಾನ ಕುರಿತು

ಶ್ರೀ ರಘುನಾಥ್‌ರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು) –

36 (445) ಉಪ ಮುಖ್ಯಮಂತ್ರಿಗಳು ಮತ್ತು ಲೋಕೋಪಯೋಗಿ ಹಾಗೂ ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೀದರ್ ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಹಾಗೂ ಗಂಗಾ ಕಲ್ಯಾಣ ಮತ್ತು ಇನ್ನಿತರೆ ಯೋಜನೆಗಳಡಿ ಅರ್ಜಿ ಸಲ್ಲಿಸಿರುವ ಒಟ್ಟು ಫಲಾನುಭವಿಗಳು ಎಷ್ಟು; (ತಾಲ್ಲೂಕುವಾರು ಮಾಹಿತಿ ಒದಗಿಸುವುದು)

(ಆ) ಸೂಕ್ತ ಫಲಾನುಭವಿಗಳನ್ನು ಗುರುತಿಸಿ ಅವರುಗಳಿಗೆ ನಿಗಮದ ವತಿಯಿಂದ ಸಹಾಯ ಧನವನ್ನು ನೀಡಲಾಗಿದೆಯೇ; ಸೂಕ್ತ ಫಲಾನುಭವಿಗಳಿಗೆ ಅನ್ಯಾಯವಾಗದಂತೆ ಸರ್ಕಾರವು ಯಾವ ರೀತಿಯ ಕ್ರಮಗಳನ್ನು ಕೈಗೊಂಡಿದೆ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಈ ನಿಟ್ಟಿನಲ್ಲಿ ಆಯಾ ತಾಲ್ಲೂಕು/ಜಿಲ್ಲಾ ಅಧಿಕಾರಿಗಳು ಸೂಕ್ತ ಫಲಾನುಭವಿಗಳನ್ನು ಗುರುತಿಸುವಲ್ಲಿ ಸಫಲರಾಗಿದ್ದಾರೆಯೇ? (ಮಾಹಿತಿ ನೀಡುವುದು)